# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 596
2. ಮಾನ್ಯ ಸದಸ್ಯರ ಹೆಸರು : ಶ್ರೀ ಅ. ದೇವೇಗೌಡ (ಪದವೀಧರರ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 14/12/2020
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರ್ಖಾನೆ ಮತ್ತು ಬಾಯ್ಲರ್‌ಗಳ ಇಲಾಖೆಯಲ್ಲಿ ಮಂಜೂರಾದ ಕಾರ್ಖಾನೆಗಳ ಸಹಾಯಕ ನಿರ್ದೇಶಕರು ಮತ್ತು ಬಾಯ್ಲರ್ ಹುದ್ದೆಗಳ ಸಂಖ್ಯೆ ಎಷ್ಟು; ಇವುಗಳಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; | ಇಲಾಖೆಯಲ್ಲಿ ಮಂಜೂರಾದ ಹುದ್ದೆಗಳು ಮತ್ತು ಖಾಲಿ ಹುದ್ದೆಗಳ ವಿವರ ಈ ಕೆಳಕಂಡಂತಿದೆ. (see table below) |
| ಆ) | ಸದರಿ ಖಾಲಿ ಹುದ್ದೆಗಳನ್ನು ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ ಭರ್ತಿ ಮಾಡದಿರಲು ಕಾರಣವೇನು? | ಇಲಾಖೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ 2013ರ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಬಾಯ್ಲರ್‌ಗಳ ಸಾಹಾಯಕ ನಿರ್ದೇಶಕರ ಹುದ್ದೆಗಳಿಗೆ ಇರುವ ವಿದ್ಯಾರ್ಹತೆಯು ಕೇಂದ್ರ ಸರ್ಕಾರ ನಿಗದಿ ಪಡಿಸಿರುವ ಮಾರ್ಗಸೂಚಿಗಳ ಅನುಗುಣವಾಗಿ ಇರುವುದಿಲ್ಲ. ಸದರಿ ವಿವರಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿದ್ದುಪಡಿ ಮಾಡುವವರೆಗೆ ಬಾಯ್ಲರ್‌ಗಳ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಅಧಿಸೂಚಿಸಲು ಸಾಧ್ಯವಾಗಿರುವುದಿಲ್ಲ. ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಷ್ಕರಿಸಿ ಅಂತಿಮಗೊಳಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತವೆ.<br>ಇತ್ತೀಚೆಗೆ ಕೋವಿಡ್–19 ಕಾರಣಗಳಿಂದ ನೇರ ನೇಮಕಾತಿಯನ್ನು ತಡೆಹಿಡಿಯಲಾಗಿರುವುದರಿಂದ ಹುದ್ದೆಗಳನ್ನು ಭರ್ತಿ ಮಾಡಲು ಸಾಧ್ಯವಾಗಿರುವುದಿಲ್ಲ. |

| ಕ್ರ. ಸಂ. | ಪದನಾಮ | ಮಂಜೂರಾದ ಹುದ್ದೆಗಳು | ಖಾಲಿ ಇರುವ ಹುದ್ದೆಗಳು |
|---|---|---|---|
| 1 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು | 20 | 09 |
| 2 | ಬಾಯ್ಲರ್‌ಗಳ ಸಹಾಯಕ ನಿರ್ದೇಶಕರು. | 4 | 4 |

ಕಾಇ–ಕಾಬಾಸೇ/49/2020

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಮತ್ತು ಸಕ್ಕರೆ ಸಚಿವರು